ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 673

ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ ಅರಳಿ

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 25-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೀದರ್ ಜಿಲ್ಲೆಯಲ್ಲಿ ಇನ್ನೂ ಹಳೆಯ ಬಸ್ಸುಗಳು ಚಾಲ್ತಿಯಲ್ಲಿದ್ದು, ಪದೇ ಪದೇ ಕೆಟ್ಟು ಹೋಗುತ್ತಿರುವುದರಿಂದ ಪ್ರಯಾಣಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಸ್ತುತ ಬೀದರ ವಿಭಾಗದಲ್ಲಿ 596 ವಾಹನಗಳಿದ್ದು, ಈ ಪೈಕಿ 165 ವಾಹನಗಳು ಸಂಸ್ಥೆಯು ನಿಗಧಿಪಡಿಸಿದ 9.00 ಲಕ್ಷ ಕಿ.ಮೀ.ಗಿಂತ ಹೆಚ್ಚು ಕಿ.ಮೀ. ಕ್ರಮಿಸಿರುವ ವಾಹನಗಳಿರುತ್ತವೆ. ನಿಗಧಿತ 9.00 ಲಕ್ಷ ಕಿ.ಮೀ. ಕ್ರಮಿಸಿದ ನಂತರ ವಾಹನಗಳ ಭೌತಿಕ ಮತ್ತು ತಾಂತ್ರಿಕ ಸ್ಥಿತಿಗತಿಯನ್ನು ಪರಿಶೀಲಿಸಿ, ಕಾರ್ಯಾಚರಣೆಗೆ ಯೋಗ್ಯವಾದ ವಾಹನಗಳ ಕಾರ್ಯಾಚರಣೆಯನ್ನು ಮುಂದುವರೆಸಲಾಗುತ್ತಿದೆ. ಅಂತಹ ವಾಹನಗಳನ್ನು ನಿಯಮಿತವಾಗಿ ಪರಿಶೀಲಿಸಿ, ಅಗತ್ಯ ದುರಸ್ತಿ ಕಾರ್ಯಗಳನ್ನು ಕೈಗೊಂಡು ಸುಸ್ಥಿತಿಯಲ್ಲಿರುವಂತೆ ನೋಡಿಕೊಳ್ಳಲಾಗುತ್ತಿದೆ ಮತ್ತು ಸದರಿ ವಾಹನಗಳನ್ನು ಪ್ರತಿ ವರ್ಷ ಸಾರಿಗೆ ಪ್ರಾಧೀಕಾರದ ಮುಂದೆ ಹಾಜರುಪಡಿಸಿ ರಹದಾರಿ ನವೀಕರಣಗೊಳಿಸಿ ಕಾರ್ಯಾಚರಣೆ ಮಾಡಲಾಗುತ್ತದೆ. ಕಾರ್ಯಾಚರಣೆಗೆ ಯೋಗ್ಯವಲ್ಲದ ವಾಹನಗಳನ್ನು ನಿಷ್ಕ್ರಿಯೆಗೊಳಿಸಲು ಕಾಲಕಾಲಕ್ಕೆ ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಕಳೆದ ವರ್ಷ 2019-20ರಲ್ಲಿ ಏಪ್ರಿಲ್‌ನಿಂದ ಅಗಷ್ಟ್‌ವರೆಗೆ ಅವಘಡಗಳ ಪ್ರಮಾಣ ಪ್ರತಿ 10000 ಕಿ.ಮೀ.ಗೆ 0.09 ಇದ್ದು ಪ್ರಸಕ್ತ ವರ್ಷದ (2020-21) ಇದೇ ಅವಧಿಗೆ ಅವಘಡಗಳ ಪ್ರಮಾಣ ಪ್ರತಿ 10000 ಕಿ.ಮೀ.ಗೆ 0.01 ಇರುತ್ತದೆ. ಮೇಲಿನ ಕ್ರಮಗಳಿಂದ ಅವಘಡಗಳ ಪ್ರಮಾಣದಲ್ಲಿ ಇಳಿಕೆಯಾಗಿರುತ್ತದೆ ಹಾಗೂ ಪದೇ ಪದೇ ವಾಹನಗಳು ಮಾರ್ಗಮಧ್ಯದಲ್ಲಿ ದುರಸ್ತಿಗೆ ಬರುವುದನ್ನು ತಡೆಗಟ್ಟಲಾಗುತ್ತಿದೆ. |
| ಆ. | ಬಂದಿದ್ದಲ್ಲಿ, ಈಶಾನ್ಯ ಕರ್ನಾಟಕ ಸಾರಿಗೆ ಸಂಸ್ಥೆ ಬೀದರ್‌ಗೆ ಹೊಸ ಬಸ್‌ಗಳನ್ನು ಖರೀದಿಸುವ ಯೋಜನೆ ಏನಾದರೂ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಹೊಸ ಬಸ್ಸುಗಳನ್ನು ಯಾವಾಗ ಖರೀದಿ ಮಾಡಲಾಗುವುದು? | ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ಸಂಸ್ಥೆಯಲ್ಲಿ ವಾಹನಗಳ ಸಹಜ ಕಾರ್ಯಾಚರಣೆವಾಗುತ್ತಿರುವುದಿಲ್ಲ. ಸಂಸ್ಥೆಯು ಆರ್ಥಿಕ ಸಂಕಷ್ಟದಲ್ಲಿರುವುದರಿಂದ ಪ್ರಸಕ್ತ ಸಾಲಿನಲ್ಲಿ (2020-21) ಹೊಸ ಬಸ್ಸುಗಳ ಖರೀದಿ ಪ್ರಕ್ರಿಯೆಯನ್ನು ಕೈಬಿಡಲಾಗಿರುತ್ತದೆ.<br><br>ಮುಂಬರುವ ದಿನಗಳಲ್ಲಿ ವಾಹನಗಳ ಖರೀದಿ ಪ್ರಕ್ರಿಯೆ ಪ್ರಾರಂಭವಾದ ನಂತರ ಬೀದರ್ ವಿಭಾಗವನ್ನೊಳಗೊಂಡಂತೆ ಸಂಸ್ಥೆಯ ವ್ಯಾಪ್ತಿಯ ಎಲ್ಲಾ ವಿಭಾಗಗಳಿಗೆ ಅವಶ್ಯಕತೆಗನುಗುಣವಾಗಿ ವಾಹನಗಳನ್ನು ಒದಗಿಸಲು ಕ್ರಮ ಕೈಗೊಳ್ಳಲಾಗುತ್ತದೆ. |

ಸಂಖ್ಯೆ: ಟಿಡಿ 167 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು